115

# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:** 556 (601)

**ಸದಸ್ಯರ ಹೆಸರು:** ಶ್ರೀ ಎನ್. ರವಿಕುಮಾರ್,

(ವಿಧಾನ ಸಭೆಯಿಂದ ಚುನಾಯಿತರಾದವರು)

**ಉತ್ತರಿಸಬೇಕಾದ ದಿನಾಂಕ:** 04.03.2021

**ಉತ್ತರಿಸುವ ಸಚಿವರು:** ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| **ಅ)** ಐ.ಎಂ.ಎ ಹಗರಣದಲ್ಲಿ ಐ.ಪಿ.ಎಸ್ ಅಧಿಕಾರಿಗಳು 20 ಕೋಟಿಗೂ ಅಧಿಕ ಹಣ ಪಡೆದಿರುವುದಾಗಿ ಸಿ.ಬಿ.ಐ ಚಾರ್ಜುಶೀಟ್‌ನಲ್ಲಿ ದಾಖಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಿಬಿಐ ವಿಶೇಷ ನ್ಯಾಯಾಲಯದಲ್ಲಿ ಐಪಿಎಸ್ ಅಧಿಕಾರಿಗಳ ವಿರುದ್ಧ ದೋಷಾರೋಪಣಾ ಪಟ್ಟಿ ಸಲ್ಲಿಸಲಾಗಿದ್ದು, ಪ್ರಕರಣ ವಿಚಾರಣಾ ಹಂತದಲ್ಲಿರುತ್ತದೆ. |
| **ಆ)** ಸದರಿ ಆರೋಪದ ಬಗ್ಗೆ ಲೋಕಾಯುಕ್ತ, ಎ.ಸಿ.ಬಿ.ಇಡಿ ಇನ್‌ಕಮ್ ಟ್ಯಾಕ್ಸ್ ವಿಭಾಗಗಳಿಗೆ ಮಾಹಿತಿ ನೀಡಲಾಗಿದೆಯೇ; ಇಲ್ಲವಾದಲ್ಲಿ ಕಾರಣವೇನು; | ಸದರಿ ಆರೋಪವು ನ್ಯಾಯಾಲಯದಲ್ಲಿ ವಿಚಾರಣಾ ಹಂತದಲ್ಲಿರುತ್ತದೆ. |
| **ಇ)** ಕೇವಲ ಭ್ರಷ್ಟಾಚಾರದ ಆರೋಪದ ಕಾರಣಕ್ಕಾಗಿ ರಾಜಕಾರಣಿಗಳು ರಾಜೀನಾಮೆ ನೀಡಿ ಜೈಲಿಗೆ ಹೋಗಿರುವಾಗ ಐ.ಪಿ.ಎಸ್ ಅಧಿಕಾರಿಗಳನ್ನು ಬಂದಿಸದಿರಲು ಕಾರಣವೇನು; | ಪ್ರಕರಣದ ತನಿಖೆಯನ್ನು ಸಿಬಿಐ ಸಂಸ್ಥೆಗೆ ಸರ್ಕಾರದಿಂದ ವಹಿಸಲಾಗಿದ್ದು, ಆರೋಪಿತರ ವಿರುದ್ಧ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಲು ಸಿಬಿಐ ಸಂಸ್ಥೆಗೆ ಯಾವುದೇ ತೊಡಕುಗಳು ಇರುವುದಿಲ್ಲ. |
| **ಈ)** ಐ.ಎಂ.ಎ ಹಗರಣಕ್ಕೆ ಸಂಬಂಧಿಸಿದಂತೆ 1000 ಪುಟಗಳ ಚಾರ್ಜ್‌ಶೀಟ್ ದಾಖಲಾದರೂ ಐ.ಪಿ.ಎಸ್ ಅಧಿಕಾರಿಗಳಿಗೆ ಯಾರ ಒತ್ತಡದಲ್ಲಿ ಪೋಸ್ಟಿಂಗ್ ನೀಡಲಾಗಿದೆ; ಐ.ಪಿ.ಎಸ್ ಅಧಿಕಾರಿಗಳ ಮೇಲೆ ಭ್ರಷ್ಟಚಾರದ ಆರೋಪ ಇರುವ ಕುರಿತು ಕೇಂದ್ರ ಸರ್ಕಾರಕ್ಕೆ ಅಮಾನತ್ತಿಗೆ ಅನುಮತಿ ಕೋರಿ ಯಾವಾಗ ಪತ್ರ ಬರೆಯಲಾಗಿದೆಯೇ; ಇಲ್ಲವಾದಲ್ಲಿ ಕಾರಣವೇನು; | ಪ್ರಕರಣ ಸಂಭವಿಸಿದಾಗ ಆರೋಪಿತ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದ ಹುದ್ದೆಗಳಿಂದ ಇತರ ಹುದ್ದೆಗಳಿಗೆ ವರ್ಗಾಯಿಸಲಾಗಿದೆ. ಐಪಿಎಸ್ ಅಧಿಕಾರಿಗಳನ್ನು ಅಮಾನತ್ತಿನಲ್ಲಿರಿಸಲು ಕೇಂದ್ರ ಸರ್ಕಾರದ ಪೂರ್ವಾನುಮತಿ ಅಗತ್ಯವಿರುವುದಿಲ್ಲ. |

| | |
|---|---|
| ಉ) ನ್ಯಾಯಾಲಯಕ್ಕೆ ಚಾರ್ಜ್‌ಶೀಟ್ ದಾಖಲಾದ ಸರ್ಕಾರಿ ನೌಕರರ ಮೇಲೆ ಸಾಮಾನ್ಯವಾಗಿ ಕೈಗೊಳ್ಳುವ ಕ್ರಮಗಳೇನು; ಹಾಗೂ ಈ ಕುರಿತು ಇರುವ ನಿಯಮಗಳೇನು? | ನ್ಯಾಯಾಲಯಕ್ಕೆ ಚಾರ್ಜ್‌ಶೀಟ್ ದಾಖಲಾದ ಸಂದರ್ಭಗಳಲ್ಲಿ ನೌಕರರ ಮೇಲೆ ವಹಿಸಬೇಕಾದ ಏಕರೂಪದ/ ಒಂದೇ ತರಹದ ಕ್ರಮಗಳು ಇರುವುದಿಲ್ಲ.<br>ರಾಜ್ಯ ಸರ್ಕಾರದ ನೌಕರರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರಂತೆ ಹಾಗೂ ಅಖಿಲ ಭಾರತ ಸೇವೆಗಳು (ನಡತೆ) ನಿಯಮ ಮತ್ತು (ಶಿಸ್ತು ಕ್ರಮ ಮತ್ತು ಮೇಲ್ಮನವಿ) ನಿಯಮಗಳಂತೆ ಅಖಿಲ ಭಾರತ ಸೇವೆಗೆ ಸೇರಿದ ಅಧಿಕಾರಿಗಳ ವಿರುದ್ಧ ಸೂಕ್ತ ಕ್ರಮ ಜರುಗಿಸಲು ಅವಕಾಶವಿರುತ್ತದೆ. |

ಸಂಖ್ಯೆ: ಇ-ಸಿಆಸುಇ 51 ಎಸ್‌ಪಿಎಸ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ